ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಶಿಕ್ಷಣ ಇಲಾಖೆಯಲ್ಲಿ ವಿವಿಧ ಹುದ್ದೆಗಳ ತುಂಬುವ ಕುರಿತು

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) :-

1437 (1774) ಮಾನ್ಯ ಪ್ರಾಥಮಿಕ ಮತ್ತು ಪೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಪ್ರೌಢಶಾಲೆಗಳಲ್ಲಿ ಚಿತ್ರಕಲೆ, ಸಂಗೀತ ಮತ್ತು ಕ್ರಾಫ್ಟ್ ಹುದ್ದೆಗಳನ್ನು ತುಂಬಲು ಅನುಮತಿ ನಿರಾಕರಿಸುತ್ತಿರುವುದು ನಿಜವೇ ; ನಿಜವಿದ್ದಲ್ಲಿ, ಕಾರಣಗಳೇನು ;

(ಆ) ಮಕ್ಕಳಿಗೆ ತಮ್ಮಲ್ಲಿನ ಸೂಕ್ತವಾದ ಪ್ರತಿಭೆಯನ್ನು ಹೆಚ್ಚಿಸಿಕೊಳ್ಳಲು ಸದರಿ ಮೂರು ವಿಷಯಗಳು ಉಪಯುಕ್ತವಾಗಿರುವುದು ಸರ್ಕಾರದ ಗಮನದಲ್ಲಿದೆಯೇ ;

(ಇ) ಸದರಿ ಹುದ್ದೆಗಳನ್ನು ಪ್ರೌಢಶಾಲೆಗಳಲ್ಲಿ ತುಂಬಬಾರದೆಂಬ ನಿಯಮ ಯಾವ ದಿನಾಂಕದಂದು ಜಾರಿಗೆ ಬಂದಿದೆ ; ಬಂದಿದ್ದಲ್ಲಿ, ಕಾರಣಗಳೇನು ;

(ಈ) ಉಳಿದ ವಿಷಯಗಳಂತೆ ಸದರಿ ವಿಷಯದ ಹುದ್ದೆಯನ್ನು ತುಂಬಲು ಸರ್ಕಾರ ಕೂಡಲೇ ಅನುಮತಿ ನೀಡಲು ಕ್ರಮ ಕೈಗೊಳ್ಳುವುದೇ?